# ಮುಗಿಲಿನಾಚೆಗೆ.....

## ಗ್ಯಾಲಿಲಿಯೋ ಗ್ಯಾಲಿಲಿಯ ಕತೆ





# ಗ್ಯಾಲಿಲಿಯೋ ಗ್ಯಾಲಿಲಿ

ಲೇಃ ಕೆನೆಥ ಆಯರ್ಲ್ಯಾಂಡ್

ಚಿತ್ರಗಳುಃ ಪೀಟರ್  ಬುಲ್ ಆರ್ಟ
ಸ್ಟುಡಿಯೋ

ಕನ್ನಡಕ್ಕೆಃ ಪ್ರಭಾಕರ ನಾನಾವಟಿ

# ಗ್ಯಾಲಿಲಿಯೋ ನ ರಜೆಯ ರಗಳೆ



ಜುಲೈ 1609 ರಲ್ಲಿಯ ಒಂದು ದಿವಸ. ಪ್ರಸಿದ್ಧ ವಿಜ್ಞಾನಿ, ಗ್ಯಾಲಿಲಿಯೋ ಗ್ಯಾಲಿಲಿ ವೆನಿಸ್ ದಲ್ಲಿ ರಜೆ ದಿನಗಳನ್ನು ಕಳೆಯುತ್ತಿದ್ದನು. ಅಲ್ಲಿಗೆ ಬಂದು ಒಂದೇ ದಿನವಾಗಿದ್ದರೂ ಯಾರೋ ಅವನಲ್ಲಿಗೆ ಬಂದು ಅವನ ವಿಶ್ರಾಂತಿಯಲ್ಲಿ ತಡೆಯೊಡ್ಡುತ್ತಿದ್ದ.

"ಇನ್ನೊಮ್ಮೆ ಹೇಳಿ." ಗ್ಯಾಲಿಲಿಯೋ ಗಂಭೀರನಾಗಿ ಕೇಳಿದನು.

ಅವನ ಗೆಳೆಯ, ಪಾವಲೊ ಸಾರ್ಪಿ, ವೆನಿಸ್ ಸರಕಾರದಲ್ಲಿಯ ಒಬ್ಬ ದೊಡ್ಡ ಅಧಿಕಾರಿಯಾಗಿದ್ದ. ಆತ ಆ ದಿನ ತನಗೆ ತಿಳಿದ ಒಂದು ಸುದ್ದಿಯ ವರ್ಣನೆ ಮಾಡುತ್ತಿದ್ದನು.

“ಹಾಲಂಡಿನ ಹ್ಯಾನ್ಸ್ ಲಿಪ್ಪರಶೆ ಎಂಬ ಕನ್ನಡಕ ತಯಾರಿಸುವವನು ಒಂದು ವಸ್ತುವನ್ನುತೋರಿಸುವವನಿದ್ದಾನೆ. ಆತನು ತನ್ನಲ್ಲಿದ್ದ ಎರಡು ಗೋಲಕಗಳನ್ನು ಒಂದು ಕೊಳವೆಯ ಎರಡು ಬದಿಯಲ್ಲಿ ಇಟ್ಟು ಕೊಳವೆಯಿಂದ ನೋಡಿದಾಗ ಮೈಲುಗಟ್ಟಲೇ ದೂರವಿದ್ದ ವಸ್ತುಗಳು ನಿಮ್ಮೆದುರಿಗೆ ಇದ್ದ ಹಾಗೆ ಕಾಣುವ ಒಂದು ಉಪಕರಣವನ್ನು ರಚಿಸಿದ್ದಾನೆಯಂತೆ.” ಎಂದು ಪಾವಲೊ ಸಾರ್ಪಿ ಹೇಳತೊಡಗಿದನು.

ಈ ಕಲ್ಪನೆ ನನಗೇಕೆ ಹೊಳೆಯಲಿಲ್ಲವೆಂದು ಗ್ಯಾಲಿಲಿಯೋ ಮನದಲ್ಲಿಯೇ ನೊಂದುಕೊಂಡನು. ವೆನಿಶಿಯನ್ ಸರಕಾರಕ್ಕೆ ಇಂತಹದೇನಾದರು ಮಾಡಿ ತೋರಿಸಿದರೆ ಸಾಕಷ್ಟು ದುಡ್ಡು ಕೊಡುವದು, ಎಂದು ಗ್ಯಾಲಿಲಿಯೋನ ನಂಬಿಗೆ.

ಭೂಸೇನೆ ಮತ್ತು ನೌಕಾದಳಗಳು ಇದಕ್ಕಾಗಿ ದುಡ್ಡಿನ ಮಳೆಯನ್ನೇ ಸುರಿಯಬಹುದೆಂದು ಅವನ ಎಣಿಕೆ. ಅಲ್ಲದೆ ಗ್ಯಾಲಿಲಿಯೋಗೆ ಈಗ ದುಡ್ಡಿನ ಆವಶ್ಯಕತೆ ಇತ್ತು.



# ಹರಕು ಮುರಕು ಪ್ರಯೋಗ

"ನೋಡಿಲ್ಲಿ, ಲಿಪ್ಪರಶೆ ನಿನ್ನನ್ನು ಕಾಣಲು ಬಂದರೆ ನೀನು ಬಹಳ ಅವಸರದಲ್ಲಿದ್ದೇನೆಂದು ಹೇಳಿ ಅವನನ್ನು ಬೀಳ್ಕೊಡು. ನಾನೇ ನಿನಗೆ ಅಂತಹ ಒಂದು ವಸ್ತುವನ್ನು ಮಾಡಿಕೊಡುತ್ತೇನೆ. ಅದಕ್ಕೆ ನಾವು ಟೆಲಿಸ್ಕೋಪ್ ಎಂದು ಕರೆಯುವ."

ತನ್ನ ರಜೆಯನ್ನು ರದ್ದುಗೊಳಿಸಿ ಗ್ಯಾಲಿಲಿಯೋ ತನ್ನ ನಗರವಾದ ಪಡುಆಕ್ಕೆ ಮರಳಿ ಬಂದನು.



ನಿಜ ಹೇಳಬೇಕೆಂದರೆ ಗ್ಯಾಲಿಲಿಯೋಗೆ ಟೆಲಿಸ್ಕೋಪ್ ಹೇಗೆ ಕೆಲಸ ಮಾಡಬಹುದು ಎಂಬುದರ ಬಗ್ಗೆ ಎಳ್ಳಷ್ಟು ಕಲ್ಪನೆ ಇರಲಿಲ್ಲ. ಆದ್ದರಿಂದ ಆತ ಒಂದು ಕೊಳವೆಯನ್ನು ತೆಗೆದುಕೊಂಡು ಅದರಿಂದ ಅದಿ ಬದಿ ನೋಡತೊಡಗಿದನು.

ಹ್ಯಾನ್ಸ ಲಿಪ್ಪರಶೆ ಎರಡು ಕನ್ನಡಕದ ಗೋಲಕಗಳನ್ನು ಕೊಳವೆಯ ತುದಿಗೆ ಕೂಡಿಸಿದ್ದನು. ಅದರಲ್ಲಿ ಒಂದು ಚಮಚೆಯ ಒಳಬದಿಯಂತಿರುವ ಕಾನ್ಕೇವ್ ಲೆನ್ಸ್ ಕೂಡಿಸಿದ್ದರಿಂದ ವಸ್ತುಗಳು ಚಿಕ್ಕದಾಗಿ ಕಾಣುತ್ತಿದ್ದವು.



ಹ್ಯಾನ್ಸ ಲಿಪ್ಪರಶೆ ಎರಡು ಕನ್ನಡಕದ ಗೋಲಕಗಳನ್ನು ಕೊಳವೆಯ ತುದಿಗೆ ಕೂಡಿಸಿದ್ದನು. ಅದರಲ್ಲಿ ಒಂದು ಚಮಚೆಯ ಒಳಬದಿಯಂತಿರುವ ಕಾನ್ಕೇವ್ ಲೆನ್ಸ್ ಕೂಡಿಸಿದ್ದರಿಂದ ವಸ್ತುಗಳು ಚಿಕ್ಕದಾಗಿ ಕಾಣುತ್ತಿದ್ದವು.
ಗ್ಯಾಲಿಲಿಯೋಗೆ ಚಮಚೆಯ ಹೊರಬದಿಯಂತಿರುವ ಕಾನ್ಕೇವ್ ಲೆನ್ಸ್ ದ ಪರಿಚಯವಿತ್ತು .



"ಒಂದು ವೇಳೆ ಇವುಗಳಲ್ಲಿಯ ಒಂದೊಂದನ್ನು ತೆಗೆದುಕೊಂಡು ಕೂಡಿಸಿದರೆ...."

ಆತನು ಗಾಜಿನ ಕೆಲಸಗಾರನ ಹತ್ತಿರ ಹೋದನು. “ನನಗೆ ಗಾಜಿನ ಸಾಕಷ್ಟು ಉಂಡೆಗಳನ್ನು ಮಾಡಿ ಅವುಗಳಿಂದ ಬೇರೆ ಬೇರೆ ಆಕಾರದ ಮತ್ತು ಗಾತ್ರದ ಲೆನ್ಸಗಳನ್ನು ಕತ್ತರಿಸಿ ಕೊಡು.” ಎಂದು ಹೇಳಿದನು.

ಗ್ಯಾಲಿಲಿಯೋನ ಅಪ್ಪಣೆ ಮೇರೆಗೆ ಗಾಜಿನ ಕೆಲಸಗಾರನು ಲೆನ್ಸಗಳ ರಾಶಿಯನ್ನೇ ಅವನ ಮುಂದಿಟ್ಟನು. ಗ್ಯಾಲಿಲಿಯೋ ಬೇರೆ ಬೇರೆ ಗಾತ್ರದ ಕಾನ್ಕೇವ್ ಮತ್ತು ಕಾನ್ವೆಕ್ಸ್ ಲೆನ್ಸಗಳನ್ನು ಕೊಳವೆಯ ಎರಡು ಬದಿಯಲ್ಲಿ ಸಿಕ್ಕಿಸಿ ವಸ್ತುಗಳ ನೀರಿಕ್ಷಣೆ ಮಾಡತೊಡಗಿದನು.

ಸಾಕಷ್ಟು ಪ್ರಯೋಗಗಳಾದ ಮೇಲೆ ಒಂದು ಲೆನ್ಸಗಳ ಜೋಡಿಯಿಂದಾಗಿ ದೂರದ ವಸ್ತುಗಳು ಮೂರರಷ್ಟು ಸಮೀಪ ಬಂದ ಹಾಗೆ ಕಂಡವು.

ಗ್ಯಾಲಿಲಿಯೋ ಲೆನ್ಸದ ಜೋಡಿಗಳನ್ನು ಬದಲಿಸುತ್ತ ಇನ್ನಷ್ಟು ಪ್ರಯೋಗಗಳನ್ನು ಮಾಡಿದನು.





“ಓಹ್! ದೊರೆಯಿತು ಈಗ 60ರಷ್ಟು ಸಮೀಪ ಬಂದಂತೆ ಕಾಣುತ್ತದೆ.” ಎಂದು ಅಚ್ಚರಿಯಾಗಿ ಗ್ಯಾಲಿಲಿಯೋ ತನ್ನಷ್ಟಕ್ಕೆ ತಾನು ಅಂದುಕೊಂಡನು.

24 ಗಂಟೆಯಷ್ಟೇ ಇಂತಹ ಟೆಲಿಸ್ಕೋಪ್ ಮಾಡಲು  ಹಿಡಿದರೂ ಅವನಿಗೆ ಸಾಕಷ್ಟು ಬೇಗ ಈ ಕೆಲಸ ಮುಗಿಸುವ ಅವಸರವಿತ್ತು. ಏಕೆಂದರೆ ಹ್ಯಾನ್ಸ ಲಿಪ್ಪರಶೆ ಹಾಲಂಡಿನಿಂದ ವ್ಹೆನಿಸ್ ಕ್ಕೆ ಹೋಗುತ್ತಲಿದ್ದಾನೆ ಎಂಬ ಸುದ್ದಿ ಅವನಿಗೆ ತಿಳಿದಿತ್ತು.

ಗ್ಯಾಲಿಲಿಯೋ ಪಾವಲೊ ಸಾರ್ಪಿಗೆ ಒಂದು ಸಂದೇಶ ಕಳಿಸಿಕೊಟ್ಟನು. ಅದರಲ್ಲಿ “ನನ್ನ ಹತ್ತಿರ ಒಂದು ಸಿಕ್ರೆಟ್ ಇದೆ” ಎಂದಿಷ್ಟೇ ಬರೆದಿತ್ತು.

ಸಾಪ್ರಿಗೆ ಈ ಸಿಕ್ರೆಟ್ ಏನಿದೆ ಎಂಬುದು ತಿಳಿಯಿತು. ಹೀಗಾಗಿ ಆ ಹಾಲಂಡಿನ ಕನ್ನಡಕ ಮಾಡುವವನಿಗೆ ಸಾರ್ಪಿಯನ್ನು ಭೆಟ್ಟಿಯಾಗಿ ಅವನು ಮಾಡಿದ ವಸ್ತು ತೋರಿಸಲು  ಶಕ್ಯವಾಗಲಿಲ್ಲ. ಏಕೆಂದರೆ ಪಾವಲೋ ಸಾರ್ಪಿ ವ್ಹೆನಿಸ್ ಸರಕಾರದ ವಿಜ್ಞಾನವಿಷಯಕ ಸಲಹೆಗಾರನೆಂದು ಕೆಲಸ ಮಾಡುತ್ತಿದ್ದನು.



# ವೆನಿಸ್ ರಾಷ್ಟ್ರಾಧ್ಯಕ್ಷನ ಮನ್ನಣೆ



“ಬಹಳೇ ಆಶ್ಚರ್ಯಕರವಾದ ಉಪಕರಣ.” ಅಧ್ಯಕ್ಷನ ಹರ್ಷೋದ್ಗಾರ!
ಮುಂದೆರಡು ವಾರಗಳಲ್ಲಿ ರಾಷ್ಟ್ರಾಧ್ಯಕ್ಷ, ಅವನ ಸಲಹೆಗಾರರು ಮತ್ತು ನೌಕಾದಳದ ಅಧಿಕಾರಿಗಳೆಲ್ಲ ಸೇಂಟ್ ಮಾರ್ಕ್ ಕ್ಯಾಥೆಡ್ರಲ್ ದ ಮಾಳಿಗೆ ಮೇಲಿಂದ ಗ್ಯಾಲಿಲಿಯೋನ ಸುಧಾರಿತ ಟೆಲಿಸ್ಕೋಪ್ ದಿಂದ ದೂರದವರೆಗಿನ ಗುಡ್ಡ-ಸಮುದ್ರವನ್ನು ನೋಡುತ್ತಿದ್ದರು.

ಅವರು ಟೆಲಿಸ್ಕೋಪದ ಮುಖಾಂತರ ಪಡುಆ ಪಟ್ಟಣವನ್ನು ನೋಡಿದರು. ಅದು ಸ್ಪಷ್ಟವಾಗಿ ಕಾಣುತ್ತಿತ್ತು. 50 ಮೈಲು ದೂರವಿರುವ ಕೊಂಜೆಲಿಯಾನೋ ಸಮೀಪದಲ್ಲಿ ಬಂದಂತೆ ಕಾಣುತ್ತಿತ್ತು. ಒಬ್ಬ ಸಲಹೆಗಾರ ಟೆಲಿಸ್ಕೋಪನ್ನು ಮತ್ತೊಂದು ಕಡೆ ತಿರುಗಿಸಿ ನೋಡಿದಾಗ ಮುರಾನೋ ನಡುಗಡ್ಡೆ ಕಾಣತೊಡಗಿತು. “ನಾನು ಚರ್ಚಿಗೆ ಹೋಗುತ್ತಿರುವವರನ್ನು ಕೂಡ ನೋಡಿದೆ! “ ಅಚ್ಚರಿಯಿಂದ ಆತ ಹೊಗಳುತ್ತಿದ್ದನು.





“ಅದೆಲ್ಲ ಬಿಡಿ.” ಇನ್ನೊಬ್ಬ ನೌಕಾಧಿಕಾರಿಯು ಸಮುದ್ರದ ಕಡೆ ಟೆಲಿಸ್ಕೋಪ್ ನ್ನು ತಿರುಗಿಸಿದನು.“ಓಹ್! ಸಮುದ್ರದ ಮೇಲೆ ತೇಲುತ್ತಿರುವ ದೂರವಿದ್ದ ಹಡಗುಗಳು ಕೂಡ ಕಾಣುತ್ತವೆ. ಅಷ್ಟು ದೂರದಲ್ಲಿ ಏನಾದರು ಇದೆ ಎಂಬುದನ್ನು ಕಂಡು ಹಿಡಿಯಲು 2 ಗಂಟೆಯಷ್ಟು ಸಮಯ ಹಿಡಿಯುವದು.”



ವೆನೆಶಿಯನ್ ಹಡಗುಗಳಲ್ಲಿ ಇಂತಹ ಟೆಲಿಸ್ಕೋಪ್ ಬೇಕು ಎಂದು ಎಲ್ಲರು ನಿರ್ಧರಿಸಿದರು. ಇದೇ ರೀತಿಯಲ್ಲಿ ಭೂಸೇನೆಗೂ ಕೂಡ ಇಂತಹ ಉಪಕರಣಗಳು ಬೇಕು ಎಂದು ಸೈನ್ಯಾಧಿಕಾರಿಗಳು ತಮ್ಮ ಬೇಡಿಕೆಯನ್ನು ಮುಂದಿಟ್ಟರು.

ಗ್ಯಾಲಿಲಿಯೋನ ಭಾಗ್ಯ ತೆರೆಯಿತು. ಅವನಿಗೆ ಹೇರಳವಾಗಿ ಸಂಪತ್ತು ದೊರೆಯಿತು. ಪಾಪ! ಲಿಪ್ಪರಶೆಗೆ ಏನೂ ದೊರೆಯಲಿಲ್ಲ. ಆತ ಗ್ಯಾಲಿಲಿಯೋನಷ್ಟು ಜಾಣನಾಗಿರಲಿಲ್ಲ ಹಾಗು  ಪಾವಲೋ ಸಾರ್ಪಿಯಂತಹ ಮಿತ್ರರು ಅವನಿಗಿರಲಿಲ್ಲ.

# ಮತ್ತೊಂದು ಆಶ್ಚರ್ಯ!



ಕೆಲ ತಿಂಗಳಾದ ಮೇಲೆ ಗ್ಯಾಲಿಲಿಯೋ ತನ್ನ ಊರಾದ ಪಡುಆಕ್ಕೆ ಮರಳಿ ಬಂದನು.

ಆತ ಹೂವು, ಹಣ್ಣುಗಳನ್ನು ನೋಡುತ್ತ ತನ್ನ ಮಧ್ಯಾನ್ಹವನ್ನು ಕಳೆಯುತ್ತಿದ್ದನು. ಆದರೆ ಈಗ ಸಂಜೆ. ಮುಗಿಲಲ್ಲಿ ಇಂದು ಪ್ರತಿಪದೆಯ ಚಂದ್ರ ಕಾಣುವನು. ಹೂದೋಟದ ಆಚೆ ಇರುವ ಚರ್ಚಿನ ಗುಮ್ಮಟದ ಹಿಂದಿನಿಂದ ಉದಯವಾಗುವ ಚಂದಿರನನ್ನು ನೋಡಬೇಕೆಂಬ ಆತನ ಆಸೆ.

ತನ್ನ ಕೋಣೆಯಲ್ಲಿರುವ ಟೆಲಿಸ್ಕೋಪ್ ನ್ನು ಮಾಳಿಗೆಯ ಮೇಲಿಟ್ಟು ಹೂದೋಟ ಕಾಣುವ ಹಾಗೆ ಟೆಲಿಸ್ಕೋಪ್ ನ್ನು ಇಟ್ಟು ಚಂದ್ರ ಮೂಡುವ ದಾರಿ ಕಾಯತೊಡಗಿದನು. ಚರ್ಚಿನ ಎರಡು ಗುಮ್ಮಟಗಳ ನಡುವೆ ಕಾಣುವ ಆಕಾಶದ ಕಡೆಗೆ ಟೆಲಿಸ್ಕೋಪದಿಂದ ನೋಡತೊಡಗಿದನು.



ಆತನು ತನ್ನ ಕಣ್ಣುಗಳನ್ನೇ ನಂಬಲಾರ. “ಎಂತಹ ಅಮೋಘವಾದ ನೋಟ! ಈವರೆಗೆ  ಎಲ್ಲರಿಗೂ ಚಂದ್ರ ನೆಂದರೆ ಬಹು ನಯವಾದ ಮತ್ತು ಹೊಳೆಯುವ ಪೃಷ್ಠವಿರುವ ಕನ್ನಡಿಯಂತೆ ಇರಬಹುದೆಂದು ಅನ್ನಿಸುತ್ತಿತ್ತು. ಆದರೆ ಟೆಲಿಸ್ಕೋಪ್ ದಿಂದ ನೋಡಿದಾಗ ಒಂದು ಕೊಳೆಯಾದ ಬಂಡೆಗಲ್ಲಿನಂತೆ ಕಾಣುತ್ತಲಿದೆ.”  ಆತ ಅದರ ಪೃಷ್ಠಭಾಗದಲ್ಲಿರುವ ಗುಡ್ಡಗಳನ್ನು ಮತ್ತು ಅವುದಳ ಸುತ್ತಲಿರುವ ಕೆರೆಯ ಆಕಾರದ ಕೊಳ್ಳಗಳನ್ನು ಕೂಡ ಗುರುತಿಸಿದನು.



ಗ್ಯಾಲಿಲಿಯೋ ಸಾಕಷ್ಟು ಆಶ್ಚರ್ಯಚಕಿತನಾದನು. ತಾನು ನೋಡಿದ್ದನ್ನು ಖಚಿತಪಡಿಸಲೆಂದು ಮರುದಿನ ಮತ್ತೇ ಮಾಳಿಗೆಯ ಮೇಲೆ ಹೋಗಿ ನೋಡಿದನು. ಇದೇ ರೀತಿಯಲ್ಲಿ ಬೇರೇ ಬೇರೆ ರಾತ್ರಿಯ ಬೇರೆಬೇರೆ ವೇಳೆಗಳಲ್ಲಿ ಚಂದ್ರನನ್ನು ನೋಡತೊಡಗಿದನು. ಮುಂದೆರಡು ತಿಂಗಳ ನಂತರ “ನನಗೆ ಇದೆಲ್ಲ ಇನ್ನೂ ನಿಚ್ಚಳವಾಗಿ ಕಾಣಬೇಕು. ನನಗೆ ಇದಕ್ಕಿಂತ ಹೆಚ್ಚು ಶಕ್ತಿಯುತವಾದ ಟೆಲಿಸ್ಕೋಪ್ ಬೇಕು.” ಎಂದು ಆಕಳಿಸುತ್ತ ಹೇಳಿದನು.



ಆತ ಮತ್ತೊಮ್ಮೆ ಗಾಜಿನ ಕೆಲಸಗಾರನ ಕಡೆ ಹೋದನು. ಹುಣ್ಣಿವೆಗೆ ಕೆಲ ದಿನಗಳಷ್ಟೇ ಉಳಿದಿದದ್ದವು. ಗ್ಯಾಲಿಲಿಯೋಗೆ ಹುಣ್ಣಿವೆಯ ದಿನದ ಒಳಗೆ ತನ್ನ ಟೆಲಿಸ್ಕೋಪ್ ನ್ನು ಸಜ್ಜುಗೊಳಿಸಬೇಕಾಗಿತ್ತು. ವೇಳೆಯನ್ನು ಉಳಿಸಲು ತಾನೇ ಲೆನ್ಸಗಳಿಗೆ ಮೆರಗು ಕೊಟ್ಟನು. ಇದರಿಂದಾಗಿ ಈ ಹೊಸ ಟೆಲಿಸ್ಕೋಪ್ ನಾಲ್ಕು ನೂರಕ್ಕಿಂತ ಹೆಚ್ಚು ಪಟ್ಟು ದೂರದ ವಸ್ತುಗಳನ್ನು ಬೃಹದಾಕಾರದಲ್ಲಿ ಕಾಣಿಸುವ ಹಾಗೆ ಮಾಡಿತು.



"ನಾನು ಸರಿಯಾಗಿ ಕೆಲಸ ಮಾಡಿದೆ". ತನ್ನಷ್ಟಕ್ಕೆ ತಾನೇ ಹೊಗಳಿಕೊಂಡನು. ಕೊನೆಗೆ ಚಂದ್ರನ ಕಡೆ ಟೆಲಿಸ್ಕೋಪ್ ವನ್ನು ತಿರುಗಿಸಿ ನೋಡತೊಡಗಿದನು.

ನೋಡಿದ ಎಲ್ಲ ಸಂಗತಿಗಳನ್ನು ಚಿತ್ರಿಸುವ ಕೆಲಸವಷ್ಟೇ ಉಳಿದಿತ್ತು.

ಆತನು ಲೆನ್ಸಗಳನ್ನು ಮಸೆಯುತ್ತ ನೂರಾರು ಟೆಲಿಸ್ಕೋಪ್ ಗಳನ್ನು ಮಾಡಿದನು. ಸಾಕಷ್ಟು ಲೆನ್ಸಗಳು ಸರಿಯಾಗಿ ಕೆಲಸ ಮಾಡಲಿಲ್ಲ. ಮಾತ್ರ ಅದರಲ್ಲಿಯ ಐದು ಟೆಲಿಸ್ಕೋಪ್ ಬಹು ಚೆನ್ನಾಗಿ ಕೆಲಸ ಮಾಡುತ್ತಿದ್ದವು. ಕೊನೆಗೊಮ್ಮೆ ಅಕಸ್ಮಾತ್ತಾಗಿ ಒಂದು ಲೆನ್ಸ ಜೋಡಿಯು 1000 ಪಟ್ಟು ದೂರದ ವಸ್ತುಗಳನ್ನು ತೋರಿಸತೊಡಗಿತು.

ಆತನು ಈ ಟೆಲಿಸ್ಕೋಪ್ ದಿಂದ ಆಕಾಶದ ನೀರಿಕ್ಷಣೆ ಮಾಡತೊಡಗಿದನು. ಆಗ ಆತನಿಗೆ ಬಹು ಅಚ್ಚರಿ ಕೊಡುವ ಸಂಗತಿಗಳು ತಿಳಿಯತೊಡಗಿದವು.



# ‘ಸ್ಟಾರಿ ಮೆಸೆಂಜರ’



ಗ್ಯಾಲಿಲಿಯೋನಿಗೆ ಮೊದಮೊದಲು ಇದನ್ನೆಲ್ಲ ನೋಡಿದಾಗ ಏನು ತಿಳಿಯಲಿಲ್ಲ. 7, ಜಾನೇವಾರಿ 1610ರಂದು ಆತನು ಗುರುಗ್ರಹದ ಉದಯವನ್ನು ನೀರಿಕ್ಷಸುತ್ತಿದ್ದನು. ಆ ಗುರುಗ್ರಹದ ಮಗ್ಗುಲಲ್ಲಿ ಇನ್ನು ಕೆಲ ತಾರೆಗಳು ಅವನಿಗೆ ಕಂಡವು. ಪಶ್ಚಿಮದಲ್ಲಿ ಎರಡು ಹಾಗು ಪೂರ್ವದಲ್ಲಿ ಒಂದು. ಗ್ಯಾಲಿಲಿಯೋ ಅವುಗಳ ಚಿತ್ರ ಬರೆದು ಮಲಗಿದನು. ಆದರೆ ಮರುದಿನ ಅದೇ ದಿಕ್ಕಿನಲ್ಲಿ ನೋಡಿದಾಗ ಆ ತಾರೆಗಳು ಮತ್ತೊಂದು ಸ್ಥಳಕ್ಕೆ ಚಲಿಸಿದ್ದವು. ಈಗ ಮೂರೂ ತಾರೆಗಳು ಗ್ರಹದ ಪಶ್ಚಿಮದಲ್ಲಿ ಕಾಣುತ್ತಿದ್ದವು.

ಕೆಲ ದಿನಗಳಾದ ಮೇಲೆ ನೋಡಿದಾಗ ಆ ಮೂರು ತಾರೆಗಳಲ್ಲಿಯ ಒಂದು ತಾರೆ ಮಾಯವಾಗಿತ್ತು. ಮತ್ತೇ ಕೆಲ ದಿನಗಳಲ್ಲಿ ಅಲ್ಲಿ ನಾಲ್ಕು ತಾರೆಗಳು ಕಾಣತೊಡಗಿದವು.

ಗ್ಯಾಲಿಲಿಯೋ ತನ್ನ ಕಣ್ಣುಗಳನ್ನೇ ನಂಬಲಾರ. “ಇದೆಲ್ಲ ವಿಚಿತ್ರವಾಗಿ ಕಾಣತೊಡಗಿದೆ. ಸೂರ್ಯ, ಇತರ ಗ್ರಹಗಳು ಮತ್ತು ತಾರೆಗಳೆಲ್ಲ ಆಕಾಶದಲ್ಲಿ ಒಂದು ನಿರ್ದಿಷ್ಟ ಸ್ಥಳಗಳಲ್ಲಿಯೇ ಇರುತ್ತವೆ, ಮತ್ತು ಪೃಥ್ವಿ ಅವುಗಳ ಸುತ್ತಲು ತಿರುಗುತ್ತದೆ, ಎಂಬುದು ಎಲ್ಲರಿಗೂ ತಿಳಿದ ಸಂಗತಿ. ಬಾಯಬಲ್ ದಲ್ಲಿ ಕೂಡ ಹೀಗೆಯೇ ಬರೆದಿದೆ. ಇಷ್ಟೇ ಅಲ್ಲ, ಎಲ್ಲರಿಗೂ ಇದು ಕಂಡು ಬರುವ ಸಂಗತಿ.”



ಕೊನೆಗೊಮ್ಮೆ ಆತನಿಗೆ ಇವುಗಳ ಅರ್ಥ ಹೊಳೆಯಿತು. ವಿಶ್ವದ ಒಂದು ಸೋಜಿಗವನ್ನೇ ಆತನು ಕಂಡು ಹಿಡಿದಿದ್ದನು. “ಕೋಪರ್ನಿಕಸ್ ಸರಿಯಾಗಿ ಹೇಳಿದ್ದನು.” ಎಂದು ಆತ ದೊಡ್ಡ ದನಿಯಲ್ಲಿ ಕೂಗಿದನು. ಸುತ್ತಮುತ್ತಲಿನ ಜನರಿಗೆಲ್ಲ ಆ ಕೂಗು ಕೇಳಿಸಿತು.



ಗ್ಯಾಲಿಲಿಯೋ “ಇದನ್ನೆಲ್ಲ ಇನ್ನೊಮ್ಮೆ ಖಚಿತ ಪಡಿಸಲೇಬೇಕು.” ಎಂದು ನಿಶ್ಚಯಿಸಿದನು. ಆದ್ದರಿಂದ ಮುಂದಿನ ಆರು ವಾರ ಪ್ರತಿ ರಾತ್ರಿ ಆತನು ಗುರು ಗ್ರಹವನ್ನು ನೀರಿಕ್ಷಿಸತೊಡಗಿದನು. ಅದರ ರೇಖಾಚಿತ್ರಗಳನ್ನು ಬರೆಯತೊಡಗಿದನು. ಈ ತಾರೆಗಳು ಹೇಗೆ ಮಾಯವಾಗುತ್ತವೆ ಎಂಬುದನ್ನು ಕಂಡು ಹಿಡಿಯಲು ಪ್ರಯತ್ನಿಸತೊಡಗಿದನು.

**70** ವರುಷಗಳ ಹಿಂದೆ.ನಿಕೋಲಸ್ ಕೋಪರ್ನಿಕಸ್ ನು ಎಲ್ಲ ತಾರೆಗಳು ಮತ್ತು ಗ್ರಹಗಳು ಪೃಥ್ವಿಯ ಸುತ್ತಲು ತಿರುಗದೆ ಸೂರ್ಯನ ಸುತ್ತ ತಿರುಗುತ್ತವೆ ಎಂದು ಹೇಳಿದ್ದನು. ಆದರೆ ಆತನು ಈ ತನ್ನ ವಿಧಾನವನ್ನು ಸಿದ್ಧಗೊಳಿಸಿರಲಿಲ್ಲ. ಗ್ಯಾಲಿಲಿಯೋ ಕೂಡ ಸಿದ್ಧಗೊಳಿಸಿರಲಿಲ್ಲ. ಆದರೆ ಕೆಲ ತಾರೆಗಳು ಗ್ರಹಗಳ ಸುತ್ತಲು ತಿರುಗುತ್ತವೆ ಎಂಬುದನ್ನು ಆತ ಸಿದ್ಧಗೊಳಿಸಿ ತೋರಿಸಬಹುದಿತ್ತು. ಇಷ್ಟೇ ಅಲ್ಲ, ಗ್ರಹಗಳು ಕೂಡ ಚಲಿಸುತ್ತವೆ ಎಂಬುದನ್ನು ತೋರಿಸಬಹುದಿತ್ತು. ಚಂದ್ರ ಪೃಥ್ವಿಯ ಸುತ್ತ ತಿರುಗುತ್ತದೆ ಮತ್ತು ಪೃಥ್ವಿ ಕೂಡ ಚಲಿಸುತ್ತದೆ. ಆಕಾಶದಲ್ಲಿ ಉಳಿದ ಎಲ್ಲ ವಸ್ತುಗಳು ಚಲಿಸುವಾಗ ಪೃಥ್ವಿ ಒಂದೆಡೆ ಸ್ಥಿರವಾಗಿ ಇರಲಾರದು, ಎಂಬುದನ್ನು ಆತ ಮನಗೊಂಡನು.

ಇದು ಒಂದು ಬಹು ಸೋಜಿಗದ. ಮತ್ತು ಎಲ್ಲರನ್ನು ದಿಗ್ಭ್ರಮೆಗೊಳಿಸುವಂತಹ ಶೋಧ. ಒಂದು ರೀತಿಯ ಆಘಾತವೇ ಸರಿ. ಗ್ಯಾಲಿಲಿಯೋ ಇಲ್ಲಿಯವರೆಗೆ ತಾರೆಗಳು, ಪೃಥ್ವಿ ಮತ್ತು ಇತರ ಉಪಗ್ರಹಗಳು ಇವೆಲ್ಲವುಗಳ ಬಗ್ಗೆ ತಾನು ಕಣ್ಣಾರೆ ನೋಡಿದ್ದನ್ನೆಲ್ಲ ಒಂದು ಪುಸ್ತಕದ ಸ್ವರೂಪದಲ್ಲಿ ಬರೆದಿಡಬೇಕೆಂದು ನಿಶ್ಚಯಿಸಿದನು. ಆ ಪುಸ್ತಕಕ್ಕೆ 'ಸ್ಟಾರಿ ಮೆಸೆಂಜರ' **(The Starry Messenger)** ಎಂದು ಹೆಸರಿಟ್ಟನು.17ನೇ ಶತಮಾನದ ಒಂದು ಮಹತ್ವದ ಪುಸ್ತಕವೆಂದು ಅದನ್ನು ಪರಿಗಣಿಸಲಾಯಿತು.



# ಎಲ್ಲೆಡೆ ಉತ್ಸುಕತೆ



ಪುಸ್ತಕ ಪ್ರಕಾಶಿತವಾದ ದಿನದಿಂದ ಯುರೋಪದಲ್ಲಿಯ ಎಲ್ಲ ದೇಶದ ಜನರು ಈ ಸ್ಟಾರಿ ಮೆಸೆಂಜರ ಪುಸ್ತಕವನ್ನು ಓದತೊಡಗಿದರು. ಓದು ಬಲ್ಲದವರು ಉಳಿದವರಿಂದ ಕೇಳಿ ತಿಳಿದುಕೊಳ್ಳತೊಡಗಿದರು. "ಕ್ರಿಸ್ಟೋಫರ ಕೋಲಂಬಸ್ ರಂತಹ ಸಂಶೋಧಕರಿಗಿಂತ ಗ್ಯಾಲಿಲಿಯೋನ ಈ ಶೋಧ ಮಿಗಿಲಾದದ್ದು!" ಎಂದು ಈ ದೇಶಗಳಲ್ಲಿಯ ವಿಜ್ಞಾನಿಗಳು ಮತ್ತು ತಜ್ಞರು ಹೊಗಳತೊಡಗಿದರು.
ಕವಿಗಳು ಇದರ ಬಗ್ಗೆ ಕವನಗಳನ್ನು ಬರೆದರು.
ಗ್ಯಾಲಿಲಿಯೋಗೆ ಬಹಳ ಸಂತಸವಾಯಿತು. ಯಾರಿಗೆ ಸಾಧ್ಯವಿದೆಯೋ ಅವರೆಲ್ಲ ಟೆಲಿಸ್ಕೋಪ್ ನ್ನು ಕೊಂಡು ಅದರಿಂದ ಆಕಾಶದರ್ಶನ ಮಾಡತೊಡಗಿದರು.

ಒಂದು ಮುಂಜಾನೆ ಟೆಲಿಸ್ಕೋಪ್ ದ ಈ ಜನಕ ತನ್ನ ಟೆಲಿಸ್ಕೋಪ್ ನ್ನು ವ್ಹೆನಿಸ್ ದಲ್ಲಿಯ ಸೇಂಟ್ ಮಾರ್ಕ ಕ್ಯಾಥೆಡ್ರಾಲ್ ದ ಗುಮ್ಮಟದ ಮೇಲೆ ಇಟ್ಟು ನೋಡತೊಡಗಿದನು. ಅಲ್ಲಿಯ ಜನಜಂಗುಳಿ ಮಾಳಿಗೆಯ ಮೆಟ್ಟಲುಗಳ ಮೇಲೆ ಸಾಲಾಗಿ ನಿಂತು ಗ್ಯಾಲಿಲಿಯೋನ ಟೆಲಿಸ್ಕೋಪ್ ದಿಂದ ಆಕಾಶವನ್ನು ನೋಡತೊಡಗಿದರು. ಇದು ಎಷ್ಟೋ ಗಂಟೆಯವರೆಗೆ ನಡೆಯಿತು. ಪಾಪ! ಆತ ದೂರದಿಂದ ಜನರನ್ನು ನೋಡುತ್ತ ನಿಂತನು.



ಫ್ರಾನ್ಸದ ಮಹಾರಾಣಿ ಕೂಡ ಮೊದಲ ಸಲ ದುರ್ಬಿಣಿಯಿಂದ ನೋಡಿದಾಗ ಬಹಳ ಉತ್ಸಾಹಿತಳಾದಳು. ತನ್ನ ಆಸ್ಥಾನದಲ್ಲಿರುವ ಎಲ್ಲರನ್ನು ಕರೆದು ಈ ಆಶ್ಚರ್ಯವನ್ನು ತೋರಿಸಿದಳು. ಅವನೆದುರು ಕಾಲೂರಿ ಅವನನ್ನು ನಮಸ್ಕರಿಸಿದಳು. ಇದನ್ನು ನೋಡಿದವರೆಲ್ಲರಿಗೂ ಬಹು ಆಶ್ಚರ್ಯವಾಯಿತು.



ಫ್ರಾನ್ಸಿನ ಮಹಾರಾಣಿ ಗ್ಯಾಲಿಲಿಯೋನನ್ನು ತನ್ನ ಅರಮನೆಗೆ ಕರೆದುಕೊಂಡು ಸನ್ಮಾನ ಮಾಡಿದಳು. ಆಕೆಯ ಪತಿ ಕೂಡ ಪ್ರಭಾವಿತನಾದನು. ಒಂದು ಪತ್ರದಲ್ಲಿ "ಇನ್ನೊಂದು ತಾರೆಯನ್ನು ನೀನು ಶೋಧಿಸಿದಾಗ ಅದಕ್ಕೆ ನನ್ನ ಹೆಸರನ್ನಿಡಬೇಕು." ಎಂದು ಬಿನ್ನವಿಸಿದನು.

ಆದರೆ ಮುಂದಿನ ತಿಂಗಳೊಷ್ಟರಲ್ಲಿ ಫ್ರಾನ್ಸಿನ ಅರಸ, ಕಿಂಗ್ ಹೆನ್ರಿಯ ಕೊಲೆಯಾಯಿತು. ಹೀಗಾಗಿ ಗ್ಯಾಲಿಲಿಯೋನಿಗೆ ಹೊಸ ತಾರೆಗೆ ಅವನ ಹೆಸರನ್ನಿಡುವ ಪ್ರಶ್ನೆ ಏಳಲಿಲ್ಲ. ಆದರೆ ಇದೇ ಸೂಚನೆಯ ಉಪಯೋಗ ಮಾಡುತ್ತ ಗ್ಯಾಲಿಲಿಯೋ ತಾನು ಶೋಧಿಸಿದ ಹೊಸ ತಾರೆಗೆ ಕ್ಯಾಸಿಮೋ ಎಂದು ಹೆಸರಿಟ್ಟನು. ಅದು ನಿಜವಾಗಿ ಟುಸ್ಕಾನಿಯ ಡ್ಯೂಕನ ಹೆಸರಿತ್ತು.

ಈ ಡ್ಯೂಕನಿಗೆ ಆತನು ಒಂದು ಟೆಲಿಸ್ಕೋಪ್ ನ್ನು ಕೂಡ ಕಳಿಸಿ ಅದರ ಜೊತೆ ಪತ್ರ ಬರೆದು ತಮ್ಮ ಹೆಸರಿನ ತಾರೆಯನ್ನು ಹೇಗೆ ಹುಡುಕಬೇಕು ಎಂಬುದನ್ನು ಬರೆದನು. ಇಷ್ಟೇ ಅಲ್ಲದೆ ತಮ್ಮ ಗೆಳೆಯರಿಗಾಗಿ ಟೆಲಿಸ್ಕೋಪ್ ಗಳನ್ನು ಕೊಂಡುಕೊಳ್ಳಲು ಬಿನ್ನವಿಸಿದನು.



ಡ್ಯೂಕ ಕ್ಯಾಸಿಮೋನಿಗೆ ಬಹು ಆನಂದವಾಯಿತು. ಗ್ಯಾಲಿಲಿಯೋಗೂ ಕೂಡ ಆಮೇಲೆ ಬಹು ಆನಂದವಾಯಿತು. ಏಕೆಂದರೆ ಕ್ಯಾಸಿಮೋ ದೊಡ್ಡ ಪ್ರಮಾಣದಲ್ಲಿ ಟೆಲಿಸ್ಕೋಪ್ ಗಳನ್ನು ಖರೀದಿಸಿದನು. ಅಲ್ಲದೆ ಟುಸ್ಕಾನಿಯ ಆಸ್ಥಾನದಲ್ಲಿ ಆಸ್ಥಾನದ ಪ್ರಧಾನ ಗಣಿತಜ್ಞನೆಂದು ನೇಮಕಾತಿ ಮಾಡಿ ಕೈತುಂಬ ಸಂಬಳ ಕೊಡತೊಡಗಿದನು.

# ಗ್ಯಾಲಿಲಿಯೋನ ಪ್ರಮಾದ



ಗ್ಯಾಲಿಲಿಯೋನ ಗೆಳೆಯ ಪಾವಲೋ ಸಾರ್ಪಿ ಅವನನ್ನು ಭೆಟ್ಟಿಯಾದಾಗ "ನೀನು ಒಳ್ಳೆಯ ಕೆಲಸ ಮಾಡುತ್ತಿರುವಿ." ಎಂದು ಅವನನ್ನು ಹೊಗಳಿದನು. ಗ್ಯಾಲಿಲಿಯೋ ತಾನು ಬರೆದ ಪುಸ್ತಕವನ್ನು ಕೊಡುತ್ತ "ನಾನೀಗ ಸೂರ್ಯನ ಮೇಲಿನ ಕಪ್ಪುಕಲೆಗಳ ಶೋಧನೆ ಮಾಡುತ್ತಿದ್ದೇನೆ." ಎಂದು ಹೇಳಿದನು.

ಗ್ಯಾಲಿಲಿಯೋಗೂ ಕೂಡ ಅವು ಏನಿರಬಹುದು ಎಂಬುದರ ಬಗ್ಗೆ ಎಳ್ಳಷ್ಟು ಕಲ್ಪನೆ ಇರಲಿಲ್ಲ. ಆತನು ಸೂರ್ಯಾಸ್ತ ಸಮಯದಲ್ಲಿ ಕಾಣುವ ಕಪ್ಪು ಕಲೆಗಳನ್ನು ಕಂಡು ಆಶ್ಚರ್ಯ ಪಡುತ್ತಿದ್ದನು. ಒಂದು ಮಾತ್ರ ನಿಜ, ಅವು ಗ್ರಹ ಇಲ್ಲವೆ ತಾರೆಗಳು ಇರಲಾರವು ಎಂಬುದರ ಬಗ್ಗೆ ಆತನಿಗೆ ಖಾತ್ರಿಯಾಗಿತ್ತು.



ಆ ದಿನ ಸಂಜೆ ಪಾವಲೋ ಸಾರ್ಪಿ ಕೂಡ ಟೆಲಿಸ್ಕೋಪ್ ದ ಮುಖಾಂತರ ಸೂರ್ಯನನ್ನು ವೀಕ್ಷಿಸಿದಾಗ ಅವನಿಗೂ ಖಚಿತವಾಗಿ ಏನೂ ಹೇಳಲು ಸಾಧ್ಯವಾಗಲಿಲ್ಲ. ಆಗ ಗ್ಯಾಲಿಲಿಯೋ ತಾನು ಇಟಲಿಯಲ್ಲಿಯ ಫ್ಲೋರೆನ್ಸ ಪಟ್ಟಣಕ್ಕೆ ಹೋಗುವವನಿದ್ದೇನೆಂದು ಹೇಳಿದನು.

“ನನ್ನನ್ನು ಕೇಳಿದರೆ ನಾನು ಅಲ್ಲಿ ಎಂದಿಗೂ ಹೋಗಲಾರೆ. ಅಲ್ಲಿ ಪೋಪ ಇದ್ದಾನೆ. ಗೊತ್ತೇ?” ಪಾವಲೋ ಕೇಳಿದನು.

“ಪೋಪನಿದ್ದರೆ... ಅವನು ಅಲ್ಲಿ ಇದ್ದರೆ...?” ಗ್ಯಾಲಿಲಿಯೋ ಮರು ಪ್ರಶ್ನೆ ಕೇಳಿದನು.

“ಆತ ಕ್ರಿಶ್ಚಿಯನ್ ಚರ್ಚಿನ ಪ್ರಮುಖ. ಆತನ ಧರ್ಮಗ್ರಂಥವಾದ ಬಾಯಬಲ್ಲಿನಲ್ಲಿ ಬರೆದಿದ್ದರ ವಿರುದ್ಧ ಏನಾದರು ಹೇಳಿದರೆ ಆತನು ಶಿಕ್ಷೆ ಕೊಡಬಹುದು. ನೀನು ವೆನಿಸ್ ಬಿಟ್ಟು ಹೋದರೆ ನಿನ್ನನ್ನು ಪೋಪನ ಸಿಟ್ಟಿನಿಂದ ರಕ್ಷಿಸಲು ಯಾರೂ ಇರಲಿಕ್ಕಿಲ್ಲ.”

ಗೆಳೆಯನ ಸಲಹೆಯನ್ನು ನಿರ್ಲಕ್ಷಿಸಿ ಆತ ಹೋಗುವದನ್ನು ನಿಶ್ಚಯಿಸಿದನು. ಇದೇ ಅವನ ಒಂದು ದೊಡ್ಡ ಪ್ರಮಾದ.

ಮೇ 1632ರಲ್ಲಿ ಚರ್ಚಿನ ಒಂದು ಮಹತ್ವದ ವ್ಯಕ್ತಿಯಾದ ಓರ್ವ ಕಾರ್ಡಿನಲ್ ನು ರೋಮದಲ್ಲಿಯ ಪೋಪನಿಗೆ ಭೆಟ್ಟಿಯಾದನು.

“ಬಾಯಬಲ್ಲಿನಲ್ಲಿ ಪರಮೇಶ್ವರನು ಈ ವಿಶ್ವದಲ್ಲಿಯ ಎಲ್ಲ ವಸ್ತುಗಳನ್ನು ಮಾಡಿರುವನು ಹಾಗು ಅವೆಲ್ಲ ಪೃಥ್ವಿಯ ಸುತ್ತ ತಿರುಗುತ್ತವೆ ಎಂದು ಹೇಳಿದೆ. ಆದರೆ ಗ್ಯಾಲಿಲಯೋ ತನ್ನ ಇನ್ನೊಂದು ಪುಸ್ತಕದಲ್ಲಿ ಪೃಥ್ವಿ ಸೂರ್ಯನ ಸುತ್ತ ತಿರುಗುತ್ತದೆ ಹಾಗು ಅದನ್ನು ಸಿದ್ಧ ಮಾಡಿ ತೋರಿಸುವೆ ಎಂದು ಬರೆದಿದ್ದಾನೆ.” ಎಂದು ಸಿಟ್ಟಿನಿಂದ ಪೋಪನಿಗೆ ಗ್ಯಾಲಿಲಿಯೋನ ಬಗ್ಗೆ ದೂರಿಟ್ಟನು.

“ನಾನು ಅವನನ್ನು ಕರೆ ಕಳಿಸುವೆ” ಎಂದು ಪೋಪನು ಕಾರ್ಡಿನಲ್ ನನ್ನು ಬೀಳ್ಕೊಟ್ಟನು.



# ಆಜನ್ಮ ಕೈದಿ



ಗ್ಯಾಲಿಲಿಯೋನ ಮೇಲೆ ಖಟಲೆ ಹೂಡಲಾಯಿತು. ಚರ್ಚಿನ ವಿರುದ್ಧ ಬರೆದಿದ್ದಕ್ಕಾಗಿ ಏಕಾಂತವಾಸದ ಶಿಕ್ಷೆಯನ್ನು ಕೊಡಲಾಯಿತು. ಸಿಯೆನಾದ ಆರ್ಚಬಿಶಪ್ ನ ಚರ್ಚಿನಲ್ಲಿ ಅವನನ್ನು ಬಂಧಿಸಿ ಇಡಲಾಯಿತು. ಪೋಪನು ಅವನನ್ನು ಬಿಡುಗಡೆ ಮಾಡುವವರೆಗೆ ಈ ಶಿಕ್ಷೆಯನ್ನು ಅನುಭವಿಸಬೇಕಾಗಬಹುದು.

ಸಂತಸದ ದಿನಗಳು ಮುಗಿದವು. ಈಗ ಆತನಿಗೆ 70 ವರುಷದ ವಯಸ್ಸು. ಮೈಗೆ ಹುಷಾರಿರಲಿಲ್ಲ. ಸಾಯುವವರೆಗೆ ಕಾರಾವಾಸದಲ್ಲಿ ಕೊಳೆಯಬೇಕಾಗಬಹುದು.

ಆರ್ಚಬಿಶಪ್ ನು ಅವನನ್ನು ಸರಿಯಾಗಿ ನೋಡಿಕೊಳ್ಳುತ್ತಿದ್ದನು. ಗ್ಯಾಲಿಲಿಯೋನಿಗೆ ತನ್ನ ಗೆಳೆಯರ ಜೊತೆ ಮಾತಾಡಲು ಅನುಕೂಲ ಮಾಡಿಕೊಡುತ್ತಿದ್ದನು. ಅವನಿಗೆ ಮತ್ತೊಂದು ಟೆಲಿಸ್ಕೋಪ್ ಮಾಡಲು ಲೆನ್ಸ ತಂದು ಕೊಡುತ್ತಿದ್ದನು.



ಪೋಪನಿಗೆ ಗ್ಯಾಲಿಲಿಯೋ ನೆಮ್ಮದಿಯಿಂದ ಇರುವ ಸುದ್ದಿ ತಿಳಿದಾಗ ಆತ ಬಹಳ ಸಿಟ್ಟಿಗೆದ್ದನು. ಗ್ಯಾಲಿಲಿಯೋ ಪೋಪನಿಗೆ ಆರ್ಸೆಸ್ಟ್ರಿ ಎಂಬ ಹಳ್ಳಿಯಲ್ಲಿ ಕಳಿಸಿಕೊಡಿ ಎಂದು ಎಷ್ಟೋ ಸಲ ಬಿನ್ನವಿಸಿಕೊಂಡಿದ್ದನು. ಅಲ್ಲಿ ಅವನ ಮಗಳು ಇರುತ್ತಿದ್ದಳು. ಆದರೆ ಪೋಪ ಒಪ್ಪಲಿಲ್ಲ. ಆಲ್ಲಿಯ ಚರ್ಚಿನ ಅಧಿಕಾರಿಗಳ ಬಂಧನದಲ್ಲಿ ಆತ ಇರಬೇಕು ಎಂದು ಕಟ್ಟಪ್ಪಣೆ ಕೊಟ್ಟನು. ಆತನು ಒಬ್ಬಂಟಿಗನಾಗಿಯೇ ಇರಲಿ, ಬಹಳವಾದರೆ ಒಂದಿಬ್ಬರು ಗೆಳೆಯರಿಗಿಂತ ಹೆಚ್ಚು ಗೆಳೆಯರ ಜೊತೆ ಮಾತಾಡಲು ಅನುಮತಿ ಇರಲಿಲ್ಲ.





ಗ್ಯಾಲಿಲಿಯೋ ಮತ್ತೊಂದು ಪುಸ್ತಕವನ್ನು ಬರೆಯತೊಡಗಿದನು. ಆದರೆ ಅವನ ಕಣ್ಣುಗಳು ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ಆಯುಷ್ಯದ ಕೊನೆಯ ದಿನಗಳಲ್ಲಿ ಆತ ಕಣ್ಣು ಕಾಣದ ಕುರುಡ ನಾದನು.

1642ರಲ್ಲಿ ಆತ ಮೃತಪಟ್ಟನು.

# ಗ್ಯಾಲಿಲಿಯೋ ಸರಿಯಾದದ್ದನ್ನೇ ಹೇಳಿದ್ದನು.



1992ರ ಆಕ್ಟೋಬರ 31 ರಂದು ಕಾರ್ಡಿನಲ್ ಪೌಪಾರ್ಡ ಹೇಳುವದನ್ನು ಪೋಪ ಮತ್ತು ಅವನ ಕಾರ್ಡಿನಲ್ಸ್ ಆಲಿಸುತ್ತಿದ್ದರು.
ಆತನು ಮೂರು ಮಹತ್ವದ ಸಂಗತಿಗಳನ್ನು ಹೇಳಿದನು.
"ಒಂದು, ನೂರಾರು ವರುಷಗಳ ಹಿಂದೆ ಬಾಯಬಲ್ ನ್ನು ಬರೆದವರು ತಾವು ನೋಡಿದ್ದನ್ನೆಲ್ಲ ಬರೆದು ಇಟ್ಟರು. ಕೆಲವು ಸಲ ಅವರು ತಪ್ಪು ಬರೆದಿಟ್ಟಿದ್ದರ ಬಗ್ಗೆ ಆಶ್ಚರ್ಯ ಪಡುವ ಕಾರಣವಿಲ್ಲ. ತಾರೆಗಳ ಬಗ್ಗೆ ಹೀಗೆ ಆಗಿರಬಹುದು.
ಎರಡು, ಗ್ಯಾಲಿಲಿಯೋನ ಕಾಲದಲ್ಲಿ ಜನರು ಬಾಯಬಲ್ಲಿನಲ್ಲಿ ಹೇಳಿದ್ದನ್ನೆಲ್ಲ ನಂಬುತ್ತಿದ್ದರು. ಆದ್ದರಿಂದ ಗ್ಯಾಲಿಲಿಯೋನ ಬಾಯಬಲ್ಲಿನ ವಿರುದ್ಧದ ಹೇಳಿಕೆಯನ್ನು ಅವರು ತಳ್ಳಿ ಹಾಕಿದರು.".

"ಮೂರು, ಕೊನೆಯಲ್ಲಿ ಚರ್ಚು ಈಗ ತನ್ನ ತಪ್ಪನ್ನು ಒಪ್ಪಿಕೊಂಡು ಗ್ಯಾಲಿಲಿಯೋ ಸರಿ ಹೇಳಿದ್ದಾನೆ ಎಂದು ತಮ್ಮ ತಪ್ಪನ್ನು ಒಪ್ಪಿಕೊಳ್ಳಬೇಕು."
ಪೋಪನು ಒಮ್ಮೆಲೆ ತಲೆದೂಗಿದನು.
ಮರುದಿನ ಎಲ್ಲ ವೃತ್ತಪತ್ರಗಳಲ್ಲಿ ಮತ್ತು ರೇಡಿಯೋ- ಟೆಲಿವ್ಹಿಜನ್ ಗಳಲ್ಲಿ "ಗ್ಯಾಲಿಲಿಯೋ ಸರಿಯಾದದ್ದನ್ನೇ ಹೇಳಿದ್ದನು" ಎಂಬ ಸುದ್ದಿ ಹರಡಿತು..
ವ್ಯಾಟಿಕನ್ ದಲ್ಲಿ ಒಂದು ದೊಡ್ಡ ಟೆಲಿಸ್ಕೋಪ್ ನ್ನು ಇಡಲಾಯಿತು.
ಚರ್ಚು ತನ್ನದೇ ಆದ ನಿರೀಕ್ಷಣಾಲಯವನ್ನು ಪಡೆಯಿತು.

ಗ್ಯಾಲಿಲಿಯೋನಿಗೆ ನಿಜವಾಗಿ ಆನಂದವಾಗಿರಬಹುದು.



# ಕಾಲಾನುಕ್ರಮ



1564 15 ಫೆಬ್ರುವರಿ 1564 ರಲ್ಲಿ ಇಟಲಿಯ ಪಿಸಾ ಎಂಬ ನಗರದಲ್ಲಿ ಜನ್ಮ

1583 ಪಿಸಾ ಕ್ಯಥೆಡ್ರಲ್ ದಲ್ಲಿಯ ತೂಗಾಡುವ ಗಂಟೆಯನ್ನು ಕಂಡು ಪೆಂಡುಲಮ್ ದ ಶೋಧ

1589 ಬೇರೆ ಬೇರೆ ತೂಕದ ಕಬ್ಬಿಣದ ಚೆಂಡುಗಳನ್ನು ಪಿಸಾದ ವಕ್ರ ಗೋಪುರದಿಂದ ಒಗೆದು ಅವುಗಳ ವೇಗವನ್ನು ಕಂಡು ಹಿಡಿದನೆಂಬ ಗಾಳಿಮಾತು.

1593 ಥರ್ಮಾಮೀಟರಿನ ಶೋಧ



1596 ತೋಪುಗಳನ್ನು ಸರಿಯಾದ ದಿಕ್ಕಿನಲ್ಲಿ ಗುರಿಪಡಿಸಲು ಬೇಕಾಗುವ ಗನ್ ಸಾಯಿಟ್ ದ ಶೋಧ

1597 ಗನ್ ಸಾಯಿಟ್ ದಲ್ಲಿ ತಿದ್ದುಪಡೆ ಮಾಡಿ ಅದನ್ನು ನಕಾಶಗಳನ್ನು ತಯಾರಿಸಲು ಉಪಯೋಗಿಸುವ ವಿಧಾನವನ್ನು ಕಂಡು ಹಿಡಿಯುವ ಥಿಯೋಡೋಲಾಯಿಟ್ ದ ಶೋಧ.

1609 ಮೊಟ್ಟ ಮೊದಲಿನ ಟೆಲಿಸ್ಕೋಪ್ ದ ಶೋಧ

1610 ಸ್ಟಾರಿ ಮೆಸೆಂಜರ ಈ ಪುಸ್ತಕದ ಪ್ರಕಾಶನ

1631 ಟು ಚೀಫ ವರ್ಲ್ಡ ಸಿಸ್ಟಿಮ್ ಎಂಬ ಸಂವಾದವಿರುವ ಪುಸ್ತಕದ ಪ್ರಕಾಶನ

1633 ಪೋಪನಿಂದ ಕಾರಾವಾಸದ ಶಿಕ್ಷೆ

1642 77 ನೇ ವಯಸ್ಸಿನಲ್ಲಿ ಆರ್ಸೇಸ್ಟರಿ ಎಂಬ ಹಳ್ಳಿಯಲ್ಲಿ ಸಾವು.



ಟೆಲಿಸ್ಕೋಪ್ ದಿಂದ ಆಕಾಶವನ್ನು ನೀರಿಕ್ಷಿಸುವ ಗ್ಯಾಲಿಲಿಯೋ ನ ಅಚ್ಚರಿಯನ್ನು ಉಂಟು ಮಾಡುವ ಕಲ್ಪನೆ. ಆದರೆ ಅದನ್ನು ಮತ್ತೆ ಯಾರೋ ಮೊದಲೇ ಹೇಳಿದ್ದರು.

ಅವನ ಪೃಥ್ವಿ ಸೂರ್ಯನ ಸುತ್ತ ತಿರುಗುತ್ತದೆ ಎಂಬ ವಿಧಾನ ಪೋಪನಿಗೆ ಎಳ್ಳಷ್ಟು ಸರಿಬಂದಿರಲಿಲ್ಲ.